# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 274
ಸದಸ್ಯರ ಹೆಸರು : ಶ್ರೀ ಸುನೀಲ್ ವಲ್ಯಾಪುರ್
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 03-02-2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಗೋಮಾಳ ಜಮೀನು ಲಭ್ಯವಿದೆ; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ ಒಟ್ಟು 1,42,690-04.09 ಎ/ಗುಂ ವಿಸ್ತೀರ್ಣದ ಗೋಮಾಳ ಜಮೀನು ಇರುತ್ತದೆ.<br>(ವಿವರಗಳನ್ನು **ಅನುಬಂಧದಲ್ಲಿ** ಒದಗಿಸಿದೆ). |
| ಆ) | ಈ ಜಮೀನುಗಳ ಮಂಜೂರಾತಿ ಮಾಡಲು ಅನುಸರಿಸುವ ಮಾನದಂಡಗಳೇನು; | ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(1)ರಡಿಯಲ್ಲಿ ಜಾನುವಾರುಗಳಿಗೆ ಅನುಗುಣವಾಗಿ ಮೀಸಲಿರಿಸಿದ ನಂತರ ಉಳಿಯುವ ಗೋಮಾಳ ಜಮೀನನ್ನು ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸರ್ಕಾರದ ಉದ್ದೇಶಗಳಿಗೆ ಕಾಯ್ದಿರಿಸಬಹುದಾಗಿದೆ. |
| ಇ) | ಕಂದಾಯ ಇಲಾಖೆಗೆ ಸೇರಿದ ಭೂಮಿಯನ್ನು ಕೆಲವರು ಒತ್ತುವರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ವಿಸ್ತೀರ್ಣ ಒತ್ತುವರಿಯಾಗಿರುತ್ತದೆ; | ಒಟ್ಟು 5,04,331-31.10 ಎ/ಗುಂ ವಿಸ್ತೀರ್ಣದ ಜಮೀನು ಒತ್ತುವರಿಯಾಗಿರುತ್ತದೆ. |
| ಈ) | ಒತ್ತುವರಿ ತೆರವುಗೊಳಿಸಲು ಕೈಗೊಂಡಿರುವ ಕ್ರಮಗಳೇನು? | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಸರ್ಕಾರಿ ಜಮೀನಿನ ಒತ್ತುವರಿಯನ್ನು ತೆರವುಗೊಳಿಸಲು ಕಾರ್ಯ ಪಡೆಗಳನ್ನು ರಚಿಸಲಾಗಿದ್ದು, ಅದರಂತೆ ಎಲ್ಲಾ ಜಿಲ್ಲಾಧಿಕಾರಿಗಳು ಕಾಲಬದ್ಧ ಕ್ರಿಯಾ ಯೋಜನೆ ಸಿದ್ಧಪಡಿಸಿಕೊಂಡಿದ್ದು, ಒತ್ತುವರಿ ಆಗಿರುವ ಸರ್ಕಾರಿ ಜಮೀನುಗಳನ್ನು ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ.<br>ಒತ್ತುವರಿ ಪ್ರಕರಣಗಳನ್ನು ಸಮರ್ಥವಾಗಿ ತಡೆಯುವ ಸಲುವಾಗಿ ಕರ್ನಾಟಕ ಭೂ ಕಬಳಿಕೆ ನಿಷೇಧ ವಿಶೇಷ ನ್ಯಾಯಾಲಯವನ್ನು ರಚಿಸಿದ್ದು, ವಿವಿಧ ನ್ಯಾಯಾಲಯಗಳಲ್ಲಿ ಒತ್ತುವರಿಗೆ ಸಂಬಂಧಿಸಿದಂತೆ ಬಾಕಿ ಇರುವ ಎಲ್ಲಾ ಪ್ರಕರಣಗಳನ್ನು ವಿಶೇಷ ನ್ಯಾಯಾಲಯಕ್ಕೆ ವರ್ಗಾಯಿಸಲು ಎಲ್ಲಾ ಕಂದಾಯ ಅಧಿಕಾರಿಗಳಿಗೆ ಸೂಚಿಸಲಾಗಿದ್ದು, ವರ್ಗಾವಣೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ ಹಾಗೂ ಒತ್ತುವರಿದಾರರ ವಿರುದ್ಧ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಕಲಂ 192-ಎ ರನ್ವಯ ಶಿಸ್ತು ಕ್ರಮ ಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ಆರ್‌ಡಿ 25 ಎಲ್‌ಜಿಕ್ಯೂ 2021**

(ಆರ್. ಅಶೋಕ)
ಕಂದಾಯ ಸಚಿವರು.

## ಅನುಬಂಧ-1

| ಕ್ರಸಂ | ಜಿಲ್ಲೆ | ಒಟ್ಟು ಗೋಮಾಳ ಜಮೀನಿನ ವಿಸ್ತೀರ್ಣ | ಒಟ್ಟು ಸರ್ಕಾರಿ ಗೋಮಾಳ ಜಮೀನಿನ ಒತ್ತುವರಿ ವಿಸ್ತೀರ್ಣ |
|---|---|---|---|
| 1 | ಬೆಂಗಳೂರು ನಗರ | 66211-14.00 | 19618-08.10 |
| 2 | ಬೆಂಗಳೂರು ಗ್ರಾಮಾಂತರ | 72471-32.00 | 9433-00.00 |
| 3 | ಬಾಗಲಕೋಟೆ | 7019-08.00 | 1450-10.00 |
| 4 | ಬೆಳಗಾವಿ | 62464-08.00 | 8086-22.00 |
| 5 | ಬಳ್ಳಾರಿ | 171-20.00 | 4-21.00 |
| 6 | ಬೀದರ್ | 17898-15.00 | 2240-20.00 |
| 7 | ಚಾಮರಾಜನಗರ | 27467-01.00 | 4570-10.00 |
| 8 | ಚಿಕ್ಕಬಳ್ಳಾಪುರ | 112481-23.00 | 54216-10.00 |
| 9 | ಚಿಕ್ಕಮಗಳೂರು | 198926-37.00 | 145111-25.00 |
| 10 | ಚಿತ್ರದುರ್ಗ | 210472-15.00 | 146051-02.00 |
| 11 | ದಕ್ಷಿಣ ಕನ್ನಡ | 6423-15.00 | 1798-31.00 |
| 12 | ದಾವಣಗೆರೆ | 49663-15.00 | 1412-00.00 |
| 13 | ಧಾರವಾಡ | 5986-25.00 | 5281-02.00 |
| 14 | ಗದಗ | 1704-29.00 | 1351-30.00 |
| 15 | ಹಾಸನ | 43136-00.00 | 28245-00.00 |
| 16 | ಹಾವೇರಿ | 16488-24.09 | 1051-32.00 |
| 17 | ಕಲಬುರಗಿ | 2968-28.00 | 2148-32.00 |
| 18 | ಕೊಡಗು | 1588-12.00 | 90-24.00 |
| 19 | ಕೋಲಾರ | 8197-34.00 | 1699-08.00 |
| 20 | ಕೊಪ್ಪಳ | 21396-28.00 | 4232-01.00 |
| 21 | ಮಂಡ್ಯ | 72062-25.00 | 8671-00.00 |
| 22 | ಮೈಸೂರು | 34652-00.00 | 1519-25.00 |
| 23 | ರಾಯಚೂರು | 34325-00.00 | 7028-25.00 |
| 24 | ರಾಮನಗರ | 25387-12.00 | 1883-12.00 |
| 25 | ಶಿವಮೊಗ್ಗ | 146925-03.00 | 33713-12.00 |
| 26 | ತುಮಕೂರು | 150804-34.00 | 11111-01.00 |
| 27 | ಉತ್ತರ ಕನ್ನಡ | 2934-07.00 | 471-25.00 |
| 28 | ಉಡುಪಿ | 3781-17.00 | 404-06.00 |
| 29 | ವಿಜಯಪುರ | 10416-31.00 | 1050-26.00 |
| 30 | ಯಾದಗಿರಿ | 12473-12.00 | 385-11.00 |
| ಒಟ್ಟು | | **1426901-04.09** | **504331-31.10** |

ತಮ್ಮ ವಿಶ್ವಾಸಿ,

ಪ್ರಧಾನ ವ್ಯವಸ್ಥಾಪಕರು, ಜಲವಾರ್ತ,

ಕರ್ನಾಟಕ ಸಾರ್ವಜನಿಕ ಉದ್ಯಮಗಳ ಇಲಾಖೆ